## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1294

ಸದಸ್ಯರ ಹೆಸರು : ಶ್ರೀ ರಮೇಶ ಗೌಡ ಹೆಚ್.ಎಂ
(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ಸಚಿವರು : ಸಾರಿಗೆ ಹಾಗೂ ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 24-12-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಎರಡನೇ ಶನಿವಾರ ಹಾಗೂ ರವಿವಾರ, ಸರ್ಕಾರಿ ರಜಾ ಸಮಯದಲ್ಲಿ ಸರ್ಕಾರಿ ನೌಕರರು ಮತ್ತು ಸಾರ್ವಜನಿಕರು ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಮಾಡುತ್ತಿದ್ದು, ಈ ಸಂದರ್ಭದಲ್ಲಿ ಖಾಸಗಿ ಸಾರಿಗೆ ಸಂಸ್ಥೆಯವರು ಸಾಮಾನ್ಯ ದರಕ್ಕಿಂತಲೂ ದುಪ್ಪಟ್ಟು ಹಣ ಪಡೆಯುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು. ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| (ಆ) | ಖಾಸಗಿಯವರಲ್ಲದೇ ಸರ್ಕಾರಿ ಸ್ವಾಮ್ಯದ ಕೆ.ಎಸ್.ಆರ್.ಟಿ.ಸಿ ಯಲ್ಲಿಯೂ ಕೂಡ ಟಿಕೆಟ್‌ನ ಬೆಲೆ ಏರಿಸುತ್ತಿರುವುದು ಸಾರ್ವಜನಿಕರಲ್ಲಿ ಆತಂಕ ಉಂಟು ಮಾಡಿರುವುದರ ಬಗ್ಗೆ ಸರ್ಕಾರದ ನಿಲುವೇನು; | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದ ಪ್ರತಿನಿತ್ಯ ಕಾರ್ಯಾಚರಣೆ ಮಾಡುವ ಅನುಸೂಚಿ ಸಾರಿಗೆಗಳಲ್ಲಿ ಹಬ್ಬ/ಹರಿದಿನಗಳಂದು ಪ್ರಯಾಣದರ ಹೆಚ್ಚಳ ಮಾಡುತ್ತಿರುವುದಿಲ್ಲ.<br>ಸರ್ಕಾರದ ಅಧಿಸೂಚನೆ ಸಂಖ್ಯೆ.ಟಿಡಿ 81 ಟಿಡಿಒ 2020, ದಿನಾಂಕ: 29-07-2020ರ ಮೇರೆಗೆ, ಸರ್ಕಾರಿ ರಜೆ ಸಮಯದಲ್ಲಿ ಖಾಸಗಿ ಹಾಗೂ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ವಾಹನಗಳ ಪ್ರಯಾಣ ದರವನ್ನು ಸಾಮಾನ್ಯ ದರದ ಒಂದೂವರೆ ಪಟ್ಟು ವಿಧಿಸಲು ಅವಕಾಶ ಕಲ್ಪಿಸಲಾಗಿದೆ.<br>ಪ್ರಮುಖ ಹಬ್ಬ/ಜಾತ್ರೆ, ರಜಾ ದಿನಗಳಲ್ಲಿ ನಿಗಮದ ವತಿಯಿಂದ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಏಕಮುಖ (One way) ಸಂಚಾರ ಒತ್ತಡವಿರುವುದರಿಂದ, ವಿರುದ್ಧ ದಿಕ್ಕಿನಿಂದ ವಾಹನಗಳನ್ನು ವಿರಳ ಪ್ರಯಾಣಿಕರಿಂದಾಗಿ ಖಾಲಿಯಾಗಿ ಆಚರಣೆ ಮಾಡಬೇಕಾಗುತ್ತದೆ. ಇದರಿಂದಾಗಿ ನಿಗಮಕ್ಕೆ |

| | | |
|---|---|---|
| | | ನಷ್ಟವಾಗುವುದರಿಂದ, ಸಾರ್ವಜನಿಕ ಪ್ರಯಾಣಿಕರ ಹಿತಾಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಅವರಿಗೆ ಹೆಚ್ಚಿನ ಹೊರೆಯಾಗದಂತೆ ನಿಗಮದಿಂದ ಆಚರಣೆ ಮಾಡುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಶೇ.10 ರಿಂದ 20 ರಷ್ಟು ಹೆಚ್ಚು ಪ್ರಯಾಣ ದರವನ್ನು ವಿಧಿಸಲಾಗುತ್ತಿದೆ. |
| (ಇ) | ಈ ರೀತಿ ಹಬ್ಬ-ಹರಿದಿನಗಳಲ್ಲಿ ಪ್ರಯಾಣಿಕರಿಗೆ ಆಗುತ್ತಿರುವ ಸುಲಿಗೆ ನಿಲ್ಲಿಸಲು ಸರ್ಕಾರ ಮುಂಬರುವ ದಿನಗಳಲ್ಲಿ ಏನು ಕ್ರಮ ಕೈಗೊಳ್ಳಲಿದೆ? (ವಿವರ ನೀಡುವುದು) | ಸರ್ಕಾರದ ಅಧಿಸೂಚನೆ ಸಂಖ್ಯೆ:ಟಿಡಿ 81 ಟಿಡಿಒ 2020, ದಿನಾಂಕ:29-07-2020 ರ ಮೇರೆಗೆ, ಮಜಲು ವಾಹನಗಳಿಗೆ ಏಕರೂಪದ ಪ್ರಯಾಣ ದರ ನಿಗದಿಪಡಿಸಿದ್ದು, ಹಬ್ಬ ಹರಿದಿನಗಳಲ್ಲಿ ಸಾಮಾನ್ಯ ಪ್ರಯಾಣ ದರದ ಒಂದೂವರೆ ಪಟ್ಟು ಹೆಚ್ಚುವರಿ ದರ ವಿಧಿಸಲು ಅವಕಾಶವಿರುತ್ತದೆ. ಸರ್ಕಾರವು ನಿಗದಿಪಡಿಸಿದ ದರಕ್ಕಿಂತ ಹೆಚ್ಚಿನ ದರವನ್ನು ಪ್ರಯಾಣಿಕರಿಂದ ವಸೂಲು ಮಾಡಬಾರದೆಂದು ಖಾಸಗಿ ಪ್ರವರ್ತಕರಿಗೆ ಮತ್ತು ಸಾರಿಗೆ ಸಂಸ್ಥೆಗಳಿಗೆ ಕಟ್ಟುನಿಟ್ಟಿನ ಸೂಚನೆ ಗಳನ್ನು ನೀಡಲಾಗಿದೆ. ಒಪ್ಪಂದ ವಾಹನಗಳ ಮಾಲೀಕರುಗಳಿಗೂ ಅಧಿಕ ಪ್ರಯಾಣ ದರಗಳನ್ನು ವಿಧಿಸದಂತೆ ಸೂಚನೆಗಳನ್ನು ನಿರಂತರ ವಾಗಿ ನೀಡಲಾಗುತ್ತಿದೆ. ರಜಾ ದಿನಗಳಲ್ಲಿ ವಿಶೇಷ ಪ್ರವರ್ತನ ಚಟುವಟಿಕೆಗಳನ್ನು ಹಮ್ಮಿಕೊಂಡು ನಿಯಮ ಉಲ್ಲಂಘಿಸಿದ ವಾಹನಗಳ ವಿರುದ್ಧ ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ. ಸಾರಿಗೆ ಇಲಾಖೆ ವತಿಯಿಂದ ಇಂತಹ ವಾಹನಗಳ ವಿರುದ್ಧ ತಪಾಸಣಾ ಕಾರ್ಯವನ್ನು ನಿರಂತರವಾಗಿ ಕೈಗೊಳ್ಳಲಾಗುತ್ತಿದ್ದು, ದಿನಾಂಕ:01-04-2019 ರಿಂದ 30-11-2021 ರವರೆಗೆ ರಾಜ್ಯಾದ್ಯಂತ ಒಟ್ಟು 27,928 ವಾಹನಗಳನ್ನು ತಪಾಸಿಸಿ, 1,588 ಪ್ರಕರಣಗಳನ್ನು ದಾಖಲಿಸಿ, ರೂ.68,23,660/- ಗಳ ದಂಡವನ್ನು ವಸೂಲಿಸಲಾಗಿದೆ. ಪ್ರವರ್ತನ ಚಟುವಟಿಕೆ ನಿರಂತರವಾಗಿ ಹಮ್ಮಿಕೊಂಡು ನಿಯಮ ಉಲ್ಲಂಘಿಸುವ ವಾಹನಗಳ ರಹದಾರಿ ವಿರುದ್ಧ ಕ್ರಮ ಕೈಗೊಳ್ಳುವ ಕಾರ್ಯ ಕೈಗೊಳ್ಳಲಾಗುತ್ತಿದೆ. |

ಟಿಡಿ 130 ಟಿಡಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು.